# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 878(911)
ಉತ್ತರಿಸಬೇಕಾದ ದಿನಾಂಕ : 20.09.2021
ಸದಸ್ಯರ ಹೆಸರು : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ(ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಅರಣ್ಯ ಇಲಾಖೆಯಲ್ಲಿ ಅರಣ್ಯ ವೀಕ್ಷಕ ಹುದ್ದೆಯಿಂದ ಹಿಡಿದು ಅರಣ್ಯ ರಕ್ಷಕ, ಉಪ ವಲಯ ಅರಣ್ಯಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿ ಹುದ್ದೆಗಳವರೆಗೆ ಇಲಾಖೆಯ ನೇಮಕಾತಿಯಲ್ಲಿ ನಡೆಯುತ್ತಿರುವ ಭ್ರಷ್ಟಾಚಾರ ಕುರಿತು ಎ.ಸಿ.ಬಿ ಯಲ್ಲಿ ಪ್ರಕರಣ ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಬೆಂಗಳೂರು ರವರ ಪತ್ರ ದಿನಾಂಕ:27-07-2021ರಲ್ಲಿ ಇಲಾಖೆಯ ನೇಮಕಾತಿಯಲ್ಲಿ ನಡೆದಿದೆ ಎನ್ನಲಾದ ಭ್ರಷ್ಟಾಚಾರದಲ್ಲಿ ಭಾಗಿಯಾಗಿರುವ ಅಧಿಕಾರಿ/ ನೌಕರರ ವಿರುದ್ಧ ತನಿಖೆ/ ವಿಚಾರಣೆ ಕೈಗೊಳ್ಳಲು ಪೂರ್ವಾನುಮತಿಯನ್ನು ನೀಡುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು), ಬೆಂಗಳೂರು ಇವರನ್ನು ಕೋರಿರುತ್ತಾರೆ. |
| ಆ | ಎ.ಸಿ.ಬಿ.ಯಲ್ಲಿ ಪ್ರಕರಣ ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದಲ್ಲಿ, ಅಂತಹ ತಪ್ಪಿತಸ್ಥ ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಈ ಪ್ರಕರಣದಲ್ಲಿ ಅರಣ್ಯ ಇಲಾಖೆಯ ಜಾಗೃತ ದಳದಿಂದ ಪ್ರಾಥಮಿಕ ತನಿಖೆ/ವಿಚಾರಣೆ ಮಾಡಲು ಆದೇಶಿಸಿದ್ದು, ಸದರಿ ದೂರಿನಲ್ಲಿ ಹೆಸರಿಸಲಾದ ಅಧಿಕಾರಿ/ಸಿಬ್ಬಂದಿಗಳು ಸದರಿ ಭ್ರಷ್ಟಾಚಾರದಲ್ಲಿ ಭಾಗಿಯಾಗಿದ್ದಾರೆಂದು ಕಂಡು ಬಂದಲ್ಲಿ, ಪರಿಶೀಲಿಸಿ ನಿಯಮಾನುಸಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದು |

**ಸಂಖ್ಯೆ: ಎಫ್‌ಇಇ 47 ಎಫ್‌ಡಿಇ 2021**

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು